# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : 1438 (1723)

**ಸದಸ್ಯರ ಹೆಸರು** : ಶ್ರೀ ಮರಿತಿಬ್ಬೇಗೌಡ (ಶಿಕ್ಷಕರ ಕ್ಷೇತ್ರ)

**ಉತ್ತರಿಸಬೇಕಾದ ದಿನಾಂಕ** : 14-03-2022

**ಉತ್ತರಿಸುವ ಸಚಿವರು** : ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿರುವ ಸರ್ಕಾರಿ/ ಅನುದಾನಿತ ಹಾಗೂ ಅನುದಾನ ರಹಿತ ಉರ್ದು ಪ್ರಾಥಮಿಕ, ಪ್ರೌಢಶಾಲೆಗಳ ಸಂಖ್ಯೆ ಎಷ್ಟು; | (ಕೆಳಗಿನ ಕೋಷ್ಟಕ 1) |
| ಆ) | ಸರ್ಕಾರಿ ಹಾಗೂ ಅನುದಾನಿತ ಶಾಲೆಗಳಲ್ಲಿ ಖಾಲಿ ಇರುವ ಬೋಧಕ/ ಬೋಧಕೇತರ ಹುದ್ದೆಗಳ ಸಂಖ್ಯೆ ಎಷ್ಟು; (ವಿವರ ನೀಡುವುದು) | (ಕೆಳಗಿನ ಕೋಷ್ಟಕ 2) |
| ಇ) | ಸದರಿ ಹುದ್ದೆಗಳನ್ನು ಯಾವ ಕಾಲಮಿತಿಯಲ್ಲಿ ಭರ್ತಿ ಮಾಡಲಾಗುವುದು; | (ಕೆಳಗಿನ ಉತ್ತರ) |

ಅ) ಉತ್ತರ:

| ಉರ್ದು ಶಾಲೆಗಳು | ಸರ್ಕಾರಿ | ಅನುದಾನಿತ | ಅನುದಾನ ರಹಿತ | ಒಟ್ಟು |
|---|---|---|---|---|
| ಪ್ರಾಥಮಿಕ | 3732 | 188 | 406 | 4326 |
| ಪ್ರೌಢ | 292 | 121 | 145 | 558 |

ಆ) ಉತ್ತರ:

| ಉರ್ದು ಶಾಲೆಗಳಲ್ಲಿ ಖಾಲಿ ಹುದ್ದೆಗಳ ವಿವರ | | | | |
|---|---|---|---|---|
| | | ಬೋಧಕ | ಬೋಧಕೇತರ | ಒಟ್ಟು |
| ಪ್ರಾಥಮಿಕ | ಸರ್ಕಾರಿ | 2030 | 0 | 2030 |
| | ಅನುದಾನಿತ | 162 | 0 | 162 |
| ಪ್ರೌಢ | ಸರ್ಕಾರಿ | 269 | 50 | 319 |
| | ಅನುದಾನಿತ | 141 | 91 | 232 |

ಇ) ಉತ್ತರ:

- ❖ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ದಿನಾಂಕ 31.01.2021 ಅಂತ್ಯಕ್ಕೆ ಖಾಲಿ ಇದ್ದ ಪದವೀಧರ ಪ್ರಾಥಮಿಕ ಶಾಲಾ ಶಿಕ್ಷಕ (6 ರಿಂದ 8 ನೇ ತರಗತಿ) 25813 ಹುದ್ದೆಗಳ ಪೈಕಿ ಕಲ್ಯಾಣ ಕರ್ನಾಟಕದ 5000 ಹಾಗೂ ಉಳಿದ 28 ಇನ್ನಿತರೆ ಜಿಲ್ಲೆಗಳ 10000 ಪದವೀಧರ ಪ್ರಾಥಮಿಕ ಶಾಲಾ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳುವ ಪ್ರಕ್ರಿಯೆ ಚಾಲ್ತಿಯಲ್ಲಿರುತ್ತದೆ.
- ❖ ಪ್ರೌಢ ಶಾಲೆಗಳಿಗೆ ಸಂಬಂಧಿಸಿದಂತೆ 3294 ಪ್ರೌಢಶಾಲಾ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳುವ ಪ್ರಸ್ತಾವನೆ ಆರ್ಥಿಕ ಇಲಾಖೆಯ ಪರಿಶೀಲನೆಯಲ್ಲಿರುತ್ತದೆ.
- ❖ ಉರ್ದು ಶಾಲೆಗಳು ಸೇರಿದಂತೆ ರಾಜ್ಯದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿಗಳ ಶೈಕ್ಷಣಿಕ ಹಿತದೃಷ್ಟಿಯಿಂದ ಸರ್ಕಾರಿ ಪ್ರಾಥಮಿಕ ಶಾಲೆಗಳಲ್ಲಿ ಖಾಲಿ ಇರುವ ಶಿಕ್ಷಕರ ಹುದ್ದೆಗಳಿಗೆ ಎದುರಾಗಿ 2021-22 ನೇ ಸಾಲಿಗೆ ಒಟ್ಟು 22000 ಅತಿಥಿ ಶಿಕ್ಷಕರ ಶಿಕ್ಷಕರನ್ನು ನೇಮಕಾತಿ ಮಾಡಿಕೊಳ್ಳುವ ಮೂಲಕ ಶಿಕ್ಷಕರ ಕೊರತೆಯನ್ನು ನೀಗಿಸಲಾಗುತ್ತಿದೆ.

ಖಾಸಗಿ ಅನುದಾನಿತ ಪ್ರಾಥಮಿಕ ಶಾಲೆಗಳಲ್ಲಿ ಹೆಚ್ಚುವರಿ ಶಿಕ್ಷಕರಿರುವುದರಿಂದ ಅನುದಾನಿತ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ನಿರ್ಬಂಧ ವಿಧಿಸಲಾಗಿರುತ್ತದೆ.

ಖಾಸಗಿ ಅನುದಾನಿತ ಪ್ರೌಢಶಾಲೆಗಳಲ್ಲಿ ದಿನಾಂಕ: 31-12-2015 ರ ಪೂರ್ವದಲ್ಲಿ ಖಾಲಿಯಾದ 2127 ಬೋಧಕ ಹುದ್ದೆಗಳನ್ನು ಭರ್ತಿ ಮಾಡಲು ಆರ್ಥಿಕ ಸಹಮತಿ ನೀಡಲಾಗಿದೆ.

ಈ) ಸರ್ಕಾರಿ ಉರ್ದು ಶಾಲೆಗಳಲ್ಲಿ ಕೊರತೆ ಇರುವ ಮೂಲಭೂತ ಸೌಲಭ್ಯಗಳಾವುವು; (ವಿವರ ನೀಡುವುದು)

ಉ) ಕೊರತೆ ಇರುವ ಮೂಲಭೂತ ಸೌಲಭ್ಯ ಗಳನ್ನು ಯಾವ ಕಾಲಮಿತಿಯಲ್ಲಿ ಒದಗಿಸಲಾಗುವುದು?

ಕಳೆದ ಮೂರು ವರ್ಷಗಳಲ್ಲಿ ರಾಜ್ಯವಲಯ ಮುಂದುವರೆದ ಯೋಜನೆಯಡಿ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ಸಮಗ್ರ ಅಭಿವೃದ್ಧಿಗಾಗಿ ಸರ್ಕಾರ ಕೈಗೊಂಡ ಕ್ರಮಗಳ ಹಾಗೂ ಬಿಡುಗಡೆಗೊಳಿಸಿದ ಅನುದಾನದ ವಿವರ ಈ ಕೆಳಕಂಡಂತಿವೆ. (ಅನುದಾನ ರೂ.ಲಕ್ಷಗಳಲ್ಲಿ)

**ಕೊಠಡಿಗಳ ನಿರ್ಮಾಣ**

| ವರ್ಷ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಮಂಜೂರಾದ ಅನುದಾನ(ಲಕ್ಷಗಳಲ್ಲಿ) |
|---|---|---|---|
| 2018-19 | 1947 | 2963 | 38020.14 |
| 2019-20 | 632 | 973 | 11989.84 |
| 2020-21 | 1007 | 1483 | 18000.00 |
| ಒಟ್ಟು | 3586 | 5419 | 68009.98 |

**ಕೊಠಡಿಗಳ ದುರಸ್ಥಿ**

| ವರ್ಷ | ಶಾಲೆಗಳ ಸಂಖ್ಯೆ | ಕೊಠಡಿಗಳ ಸಂಖ್ಯೆ | ಮಂಜೂರಾದ ಅನುದಾನ (ಲಕ್ಷಗಳಲ್ಲಿ) |
|---|---|---|---|
| 2018-19 | 2697 | 4195 | 4242.44 |
| 2019-20 | 1065 | 5003 | 3681.00 |
| 2020-21 | 187 | 187 | 476.11 |
| ಒಟ್ಟು | 3949 | 9385 | 8399.55 |

- 2019-20 ನೇ ಸಾಲಿನಲ್ಲಿ ಆರ್.ಐ.ಡಿ.ಎಫ್-25 ಅಡಿಯಲ್ಲಿ ಅಧಿಕ ಮಳೆಯಿಂದ ಹಾನಿಯಾದ 3386 ಸರ್ಕಾರಿ ಶಾಲೆಗಳ 6469 ಕೊಠಡಿಗಳ ಮರು ನಿರ್ಮಾಣಕ್ಕಾಗಿ ರೂ.75807.30 ಲಕ್ಷಗಳ

| | | |
|---|---|---|
| | | ಅನುದಾನವನ್ನು ಮಂಜೂರು ಮಾಡಿದೆ.<br>• 2019-20 ನೇ ಸಾಲಿನಲ್ಲಿ ಮಳೆಯಿಂದ ಹಾನಿಗೊಳಗಾದ 6196 ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ 13260 ಕೊಠಡಿಗಳ ದುರಸ್ಥಿಗೆ ರೂ.19951.75 ಲಕ್ಷಗಳ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ಮುಖಾಂತರ ಕ್ರಮ ಕೈಗೊಳ್ಳಲಾಗಿದೆ.<br>• 2020-21 ನೇ ಸಾಲಿನಲ್ಲಿ ಅತಿವೃಷ್ಟಿ/ಪ್ರವಾಹದಿಂದ ಹಾನಿಗೀಡಾದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ತುರ್ತು ದುರಸ್ಥಿಗೆ ರೂ.7557.99 ಲಕ್ಷಗಳ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ಮುಖಾಂತರ ಕ್ರಮ ಕೈಗೊಳ್ಳಲಾಗಿದೆ.<br>• 2020-21ನೇ ಸಾಲಿನಲ್ಲಿ ರಾಜ್ಯ ವಲಯ ಹಾಗೂ ಮನರೇಗಾ(MGNREGA) ಅನುದಾನ ಒಗ್ಗೂಡಿಸುವಿಕೆಯ ಮೂಲಕ ಶೌಚಾಲಯ ನಿರ್ಮಾಣ, ಆಟದ ಮೈದಾನ, ಆವರಣ ಗೋಡೆ, ಅಡುಗೆ ಕೋಣೆ, ಮಳೆ ನೀರು ಕೊಯ್ಲು ಯೋಜನೆ, ಪೌಷ್ಟಿಕ ತೋಟ ನಿರ್ಮಾಣ ಯೋಜನೆಗಳನ್ನು ಅನುಷ್ಠಾನಗೊಳಿಸಲು ರೂ. 2920.99 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ.<br>• 2021-22ನೇ ಸಾಲಿನಲ್ಲಿ ರಾಜ್ಯ ವಲಯ ಹಾಗೂ ನರೇಗಾ ಅನುದಾನ ಒಗ್ಗೂಡಿಸುವಿಕೆಯ ಮೂಲಕ ಶೌಚಾಲಯ ನಿರ್ಮಾಣ ಹಾಗೂ ದುರಸ್ತಿಗೆ ರೂ. 3500.00 ಲಕ್ಷಗಳ ಅನುದಾನ ಮಂಜೂರಾಗಿರುತ್ತದೆ ಹಾಗೂ ಬಿಡುಗಡೆ ಮಾಡಲಾಗಿದೆ.<br>• 2019-20 ಸಾಲಿನಲ್ಲಿ ರಾಜ್ಯ ಮುಂದುವರಿದ ಕಾರ್ಯಕ್ರಮಗಳಡಿಯಲ್ಲಿ ಕುಡಿಯುವ ನೀರು ಶೌಚಾಲಯಗಳ ನಿರ್ವಹಣೆಗಾಗಿ ಪ್ರತಿ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳಿಗೆ ಘಟಕ ವೆಚ್ಚ ರೂ.4525/- ರಂತೆ 21008 ಶಾಲೆಗಳಿಗೆ ರೂ. 950.65 ಲಕ್ಷಗಳು ,ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಿಗೆ ಘಟಕ ವೆಚ್ಚ ರೂ.5700/- ರಂತೆ 21932 ಶಾಲೆಗಳಿಗೆ ರೂ. 1250.13 ಲಕ್ಷಗಳು ಮತ್ತು ಸರ್ಕಾರಿ ಪ್ರೌಢ ಶಾಲೆಗಳಿಗೆ ಘಟಕ ವೆಚ್ಚ ರೂ.6370/- ರಂತೆ 4697 ಶಾಲೆಗಳಿಗೆ 299.20 ಲಕ್ಷಗಳಂತೆ ಒಟ್ಟು 47637 ಶಾಲೆಗಳಿಗೆ ರೂ.2499.98 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.<br>• 2020-21 ಸಾಲಿನಲ್ಲಿ ರಾಜ್ಯ ಮುಂದುವರಿದ ಕಾರ್ಯಕ್ರಮಗಳಡಿಯಲ್ಲಿ ಕುಡಿಯುವ ನೀರು ಶೌಚಾಲಯಗಳ ನಿರ್ವಹಣೆಗಾಗಿ ಪ್ರತಿ ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆಗಳಿಗೆ ಘಟಕ ವೆಚ್ಚ ರೂ.5400/- ರಂತೆ 20795 ಶಾಲೆಗಳಿಗೆ ರೂ. 1122.93 ಲಕ್ಷಗಳು ,ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆಗಳಿಗೆ ಘಟಕ ವೆಚ್ಚ ರೂ.6790/- ರಂತೆ 22489 ಶಾಲೆಗಳಿಗೆ ರೂ. 1527.07 ಲಕ್ಷಗಳು ಮತ್ತು ಸರ್ಕಾರಿ ಪ್ರೌಢ ಶಾಲೆಗಳಿಗೆ ಘಟಕ ವೆಚ್ಚ ರೂ.7400/- ರಂತೆ 4727 ಶಾಲೆಗಳಿಗೆ ರೂ. 349.80 ಲಕ್ಷಗಳಂತೆ ಒಟ್ಟು 48011 ಶಾಲೆಗಳಿಗೆ ರೂ. 2999.80 ಲಕ್ಷಗಳ ಅನುದಾನ ಬಿಡುಗಡೆ ಮಾಡಲಾಗಿದೆ.<br><br>2020-21 ನೇ ಸಾಲಿನಲ್ಲಿ ಅತಿವೃಷ್ಟಿ/ಪ್ರವಾಹದಿಂದ ಹಾನಿಗೀಡಾದ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲೆಗಳ ತುರ್ತು ದುರಸ್ಥಿಗೆ |

| | | |
|---|---|---|
| | | ರೂ.7557.99 ಲಕ್ಷಗಳ ಅನುದಾನದಲ್ಲಿ ಜಿಲ್ಲಾಧಿಕಾರಿಗಳ ಮುಖಾಂತರ ಕ್ರಮ ಕೈಗೊಳ್ಳಲಾಗಿದೆ.<br><br>2021-22ನೇ ಸಾಲಿನಲ್ಲಿ ರಾಜ್ಯ ವಲಯ ಯೋಜನೆಯಡಿ ಶಾಲಾ ಕೊಠಡಿಗಳ ನಿರ್ಮಾಣ ಮತ್ತು ದುರಸ್ಥಿ, ಶೌಚಾಲಯ ನಿರ್ಮಾಣ ಮತ್ತು ದುರಸ್ತಿ ಹಾಗೂ ನಿರ್ವಹಣಾ ವೆಚ್ಚಗಳಿಗೆ ಮತ್ತು ಅಗತ್ಯ ಮೂಲಭೂತ ಸೌಲಭ್ಯಗಳಿಗಾಗಿ ಒಟ್ಟು ರೂ. 67125.41 ಲಕ್ಷಗಳ ಅನುದಾನವನ್ನು ರಾಜ್ಯದ ಜಿಲ್ಲಾ ಅನುಷ್ಠಾನಾಧಿಕಾರಿಗಳಿಗೆ ಬಿಡುಗಡೆ ಮಾಡಲಾಗಿದೆ.<br><br>ಅನುದಾನದ ಲಭ್ಯತೆಯ ಆಧರಿಸಿ ಸರ್ಕಾರಿ ಶಾಲೆಗಳಿಗೆ ಮೂಲಭೂತ ಸೌಲಭ್ಯಗಳನ್ನು ಅವಶ್ಯಕತೆಯಿರುವ ಕಡೆ ಆದ್ಯತೆಯ ಮೇರೆಗೆ ಹಂತ ಹಂತವಾಗಿ ಅನುಷ್ಠಾನಗೊಳಿಸಲು ಕ್ರಮ ವಹಿಸಿದೆ. |

ಇಪಿ 23 ಪಿಎಂಎ 2022

*(ಬಿ.ಸಿ. ನಾಗೇಶ್)*

*ಪ್ರಾಥಮಿಕ ಮತ್ತು ಪ್ರೌಢಶಿಕ್ಷಣ*

*ಹಾಗೂ ಸಕಾಲ ಸಚಿವರು*